12

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1057 |
| ಸದಸ್ಯರ ಹೆಸರು | : | ಶ್ರೀ ಎಸ್.ಎಲ್.ಭೋಜೇಗೌಡ, (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 22-12-2021. |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರ |
|---|---|---|
| 1 | ಚಿಕ್ಕಮಗಳೂರು ನಗರ ವ್ಯಾಪ್ತಿಗೆ ಸಂಬಂಧಿಸಿದಂತೆ ಹಾದು ಹೋಗಿರುವ ರಾಜ್ಯ ಹೆದ್ದಾರಿಗಳು ಯಾವುವು; | ಚಿಕ್ಕಮಗಳೂರು ನಗರ ವ್ಯಾಪ್ತಿಗೆ ಸಂಬಂಧಿಸಿದಂತೆ ಈ ಕೆಳಕಂಡ ರಾಜ್ಯ ಹೆದ್ದಾರಿಗಳು ಹಾದು ಹೋಗಿರುತ್ತವೆ.<br>1) **ರಾಜ್ಯ ಹೆದ್ದಾರಿ-57:** ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ತಾಲ್ಲೂಕಿನ ಬಾಗಲಕೋಟೆ-ಬಿಳಿಗಿರರಂಗನಬೆಟ್ಟ ರಸ್ತೆಯು ನಗರದಲ್ಲಿ ಕಿಮೀ 427.00 ರಿಂದ ಕಿಮೀ 436.00 ರವರೆಗೆ ಒಟ್ಟು 9.00 ಕಿಮೀ ನಗರ ವ್ಯಾಪ್ತಿಯಲ್ಲಿ ಹಾದುಹೋಗಿರುತ್ತದೆ.<br>2) **ರಾಜ್ಯ ಹೆದ್ದಾರಿ-64:** ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ತಾಲ್ಲೂಕಿನ ಕಡೂರು--ಕಾಯಂಗಡ ರಸ್ತೆಯು ನಗರಸಭಾ ವ್ಯಾಪ್ತಿಯಲ್ಲಿ ಕಿ.ಮೀ.27.10 (ರಾಂಪುರ) ರಿಂದ ಕಿ.ಮೀ.36.00 (ಕಣಿವೆ ರುದ್ರೇಶ್ವರ ದೇವಸ್ಥಾನ) ವರೆಗೆ ಒಟ್ಟು 8.90 ಕಿ.ಮೀ. ಹಾದು ಹೋಗಿರುತ್ತದೆ. ದಿನಾಂಕ: 28.05.2014ರ ಭಾರತ ಸರ್ಕಾರದ ವಿಶೇಷ ಅಧಿಸೂಚನೆ, ನವದೆಹಲಿ, ಇವರ ಆದೇಶದಂತೆ ಸದರಿ ರಸ್ತೆಯನ್ನು ಕಡೂರು ಕಾಯಂಗಡ (ಎನ್.ಹೆಚ್-173) ರಾಷ್ಟ್ರೀಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ. |
| 2 | ಚಿಕ್ಕಮಗಳೂರು ನಗರ ವ್ಯಾಪ್ತಿಯಲ್ಲಿ ಹಾದು ಹೋಗುವ ರಾಜ್ಯ ಹೆದ್ದಾರಿ-64 ರ ರಸ್ತೆಯನ್ನು ಅಗಲಿಸಿದ ಸಂಬಂಧ ಸರ್ಕಾರ ಪರಿಹಾರ ಒದಗಿಸಿದೆಯೇ; ಒದಗಿಸಿದ್ದಲ್ಲಿ, ಪೂರ್ಣ ಮಾಹಿತಿ ನೀಡುವುದು; | ಚಿಕ್ಕಮಗಳೂರು ನಗರ ವ್ಯಾಪ್ತಿಯಲ್ಲಿ ಹಾದು ಹೋಗುವ ರಾಜ್ಯ ಹೆದ್ದಾರಿ-64ರ ರಸ್ತೆಯನ್ನು 2010 ರ ಅವಧಿಯಲ್ಲಿ ರಸ್ತೆ ಅಗಲೀಕರಣ ಕಾಮಗಾರಿ ನಡೆಸುವ ಸಮಯದಲ್ಲಿ ಲೋಕೋಪಯೋಗಿ ಇಲಾಖೆಯ ವತಿಯಿಂದ ಯಾವುದೇ ಭೂಪರಿಹಾರ ನೀಡಿರುವುದಿಲ್ಲ. |
| 3 | ರಾಜ್ಯ ಹೆದ್ದಾರಿ-64, ಚಿಕ್ಕಮಗಳೂರು ನಗರಕ್ಕೆ ಸಂಬಂಧಿಸಿದಂತೆ, ಸಾರ್ವಜನಿಕರು ಹೈಕೋರ್ಟ್‌ಗೆ ಹೋಗಿದ್ದು, ಹೈಕೋರ್ಟ್‌ನಲ್ಲಿ ಸಾರ್ವಜನಿಕರ ಪರವಾಗಿ ತೀರ್ಪು ನೀಡಿದ್ದರೂ ಸಹ, ಸರ್ಕಾರ ತೀರ್ಪನ್ನು ಪಾಲಿಸದಿರಲು ಕಾರಣವೇನು? (ಮಾಹಿತಿ ನೀಡುವುದು) | • ಚಿಕ್ಕಮಗಳೂರು ನಗರದ ಇಂದಿರಾ ಗಾಂಧಿ ರಸ್ತೆ (ಕಡೂರು-ಕಾಯಂಗಡ ರಾ.ಹೆ-64)ರ ರಸ್ತೆ ಅಗಲೀಕರಣಕ್ಕೆ ತನಗೆ ಸೇರಿದ ಸ್ವತ್ತನ್ನು ಪಡೆಯಲಾಗಿದೆ ಎಂದು ಅದಕ್ಕಾಗಿ ಪರಿಹಾರ ಕೋರಿ ಶ್ರೀ ಮೊಹಮ್ಮದ್ ಯೂಸೂಫ್, ಬಿನ್ ಲೇಟ್ ಮೊಹಮ್ಮದ್ ಹುಸೇನ್ ಚಿಕ್ಕಮಗಳೂರು, ಇವರು ಓ.ಎಸ್ ಸಂಖ್ಯೆ: 01/2016 ರಂತೆ ಚಿಕ್ಕಮಗಳೂರಿನ ಸಿವಿಲ್ ನ್ಯಾಯಾಲಯದಲ್ಲಿ ದಾವೆ ದಾಖಲಿಸಿದ್ದು, ದಿನಾಂಕ: 22.10.2019 ರಂದು ಪರಿಹಾರದ ಮೊತ್ತ ರೂ.3,73,45,552/- ಗಳನ್ನು ಪಾವತಿಸಲು ಆದೇಶವಾಗಿರುತ್ತದೆ.<br>ಸದರಿ ಆದೇಶದ ವಿರುದ್ಧ ರಾಜ್ಯ ಉಚ್ಛ ನ್ಯಾಯಾಲಯದಲ್ಲಿ ಮೇಲ್ಮನವಿಯನ್ನು ಸಂಖ್ಯೆ: ಆರ್.ಎಫ್.ಎ 1085/2020 ರಂತೆ ಸಲ್ಲಿಸಲಾಗಿದ್ದು ಮಾನ್ಯ ನ್ಯಾಯಾಲಯವು |

| ಕ್ರ. ಸಂ | ಪ್ರಶ್ನೆಗಳು | ಉತ್ತರ |
| --- | --- | --- |
| | | ಘೋಷಿತ ಪರಿಹಾರ ಧನದ ಮೊತ್ತದ 25% ಹಣವನ್ನು ಠೇವಣಿಮಾಡಲು ತಿಳಿಸಿದ್ದು ಅದರಂತೆ ರೂ.93,36,388/- ಮೊತ್ತವನ್ನು ನ್ಯಾಯಾಲಯದಲ್ಲಿ ಠೇವಣಿಯಾಗಿ ಪಾವತಿಸಲಾಗಿದೆ. ಮೇಲ್ಮನವಿಯ ವಿಚಾರಣೆ ಮುಂದುವರಿದಿರುತ್ತದೆ.<br><br>• ಹಾಗೂ ಚಿಕ್ಕಮಗಳೂರು ನಗರಸಭೆ ವ್ಯಾಪ್ತಿಯಲ್ಲಿ ಹಾದು ಹೋದ ರಾಜ್ಯ ಹೆದ್ದಾರಿ 64 ರಲ್ಲಿ ಕತ್ರಿಮಾರಮ್ಮ ದೇವಸ್ಥಾನದಿಂದ ಬೋಳರಾಮೇಶ್ವರ ದೇವಸ್ಥಾನದವರೆಗೆ ರಸ್ತೆ ಅಭಿವೃದ್ಧಿಪಡಿಸಿದಾಗ ರಸ್ತೆ ಅಗಲೀಕರಣಕ್ಕೆ ತಮಗೆ ಸೇರಿದ ಸ್ವತ್ತನ್ನು ಪಡೆಯಲಾಗಿದೆ ಎಂದು ಅದಕ್ಕಾಗಿ ಪರಿಹಾರ ಕೋರಿ ರಿಟ್ ಪಿಟಿಷನ್ ನಂ: 49056-49076/ 2016 ರಲ್ಲಿ 21 ಜನ ರಾಜ್ಯ ಉಚ್ಛ ನ್ಯಾಯಾಲಯದಲ್ಲಿ ದಾವೆ ದಾಖಲಿಸಿರುತ್ತಾರೆ.<br>ಸದರಿ ರಿಟ್ ಅರ್ಜಿಗೆ ಸಂಬಂಧಿಸಿದಂತೆ ಮಾನ್ಯ ಉಚ್ಛ ನ್ಯಾಯಾಲಯವು ದಿನಾಂಕ:08.03.2018ರ ಆದೇಶದಲ್ಲಿ ಅರ್ಜಿದಾರರಿಗೆ ಪರಿಹಾರ ನೀಡುವ ಕುರಿತು ಪರಿಶೀಲಿಸಿ, ಅಗತ್ಯವಾದ ಕ್ರಮವಹಿಸುವಂತೆ ತಿಳಿಸಲಾಗಿರುತ್ತದೆ.<br>ಈ ಸಂಬಂಧ ಅರ್ಜಿದಾರರು ತಿಳಿಸಿರುವಂತೆ ಸದರಿ ರಸ್ತೆಯ ಅಗಲೀಕರಣದ ಸಂದರ್ಭದಲ್ಲಿ ವಾಸ್ತವವಾಗಿ ಅವರಿಗೆ ಸೇರಿದ ಜಾಗವನ್ನು ರಸ್ತೆಗಾಗಿ ಬಿಟ್ಟುಕೊಟ್ಟಿದ್ದಾರೆಯೇ? ಅಥವಾ ರಸ್ತೆಯ ಅತಿಕ್ರಮಿಸಿದ ಜಾಗವನ್ನು ಬಿಟ್ಟುಕೊಟ್ಟಿರುವುದೇ? ಎಂಬುದನ್ನು ಪರಿಶೀಲಿಸಲು ನಗರ ಸಭೆಯ ದಾಖಲೆಗಳೊಂದಿಗೆ ಹಾಲಿ ಸ್ವಾಧೀನವನ್ನು ತುಲನೆಮಾಡಿ, ಪರಿಹಾರಕ್ಕೆ ಅರ್ಹವಾದ ಪ್ರಕರಣಗಳನ್ನು ಹಾಗೂ ಪರಿಹಾರಕ್ಕೆ ಅರ್ಹವಾದ ಸೊತ್ತಿನ ಅಳತೆಯನ್ನು ನಿಖರವಾಗಿ ಗುರುತಿಸಬೇಕಾಗಿದ್ದು, ಆ ಪಕ್ರಿಯೆ ಜಾರಿಯಲ್ಲಿರುತ್ತದೆ. |

ಕಡತ ಸಂಖ್ಯೆ: ಲೋಇ 345 ಸಿಎನ್‌ಹೆಚ್ 2021 (ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು